ಸ್ಥಳೀಯ ... STD 10.3.2020

# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಸದಸ್ಯರ ಹೆಸರು | : | ಶ್ರೀ ಸುನೀಲ್ ಸುಬ್ರಮಣಿ, ಎಂ.ಪಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ), |
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | : | 689 |
| ಉತ್ತರಿಸಬೇಕಾದ ದಿನಾಂಕ | : | 10.03.2020. |
| ಉತ್ತರಿಸಬೇಕಾದವರು | : | ನಗರಾಭಿವೃದ್ಧಿ ಸಚಿವರು. |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಮಡಿಕೇರಿ ನಗರಕ್ಕೆ ಕುಡಿಯುವ ನೀರನ್ನು ಪೂರೈಸುವ ಕುಂಡಾಮೇಸ್ತ್ರಿ ಯೋಜನೆ ಯಾವಾಗ ಪ್ರಾರಂಭವಾಯಿತು; ಈ ಯೋಜನೆಗೆ ಇಲ್ಲಿಯವರೆಗೆ ಸರ್ಕಾರದಿಂದ ಬಿಡುಗಡೆಯಾದ ಹಣ ಎಷ್ಟು; | ಮಡಿಕೇರಿ ನಗರಕ್ಕೆ ಕುಂಡಾಮೇಸ್ತ್ರಿ ಮತ್ತು ಕೂಟು ಹೊಳೆಯಿಂದ ಕುಡಿಯುವ ನೀರು ಸರಬರಾಜು ಯೋಜನೆಯನ್ನು ದಿನಾಂಕ 04-10-2010 ರಿಂದ ಪ್ರಾರಂಭಿಸಿ, ಸಗಟು ನೀರು ಪೂರೈಕೆ ಕಾಮಗಾರಿಗಳನ್ನು ಕಾರ್ಯಗತಗೊಳಿಸಿ ಕುಂಡಾಮೇಸ್ತ್ರಿ ಮೂಲದಲ್ಲಿ ಕಿರು ಅಣೆಕಟ್ಟೆ ನಿರ್ಮಾಣ ಹೊರತುಪಡಿಸಿ ಉಳಿದ ಕಾಮಗಾರಿಗಳನ್ನು ಪೂರ್ಣಗೊಳಿಸಿ ಯೋಜನೆಯನ್ನು ದಿನಾಂಕ 25.09.2016 ರಂದು ಚಾಲನೆಗೊಳಿಸಲಾಗಿದೆ. ಸರ್ಕಾರದಿಂದ ಕರ್ನಾಟಕ ನಗರ ನೀರು ಸರಬರಾಜು ಮಂಡಳಿಗೆ ಬಿಡುಗಡೆಗೆ ಮಾಡಲಾಗಿರುವ ಅನುದಾನದಲ್ಲಿ ಮಂಡಳಿಯು ಇಲ್ಲಿಯವರೆಗೆ ರೂ.23.55 ಕೋಟಿಗಳನ್ನು ಈ ಯೋಜನೆಗೆ ಹಂಚಿಕೆ ಮಾಡಿರುತ್ತದೆ. |
| ಆ) | ಇದಕ್ಕೆ ಕಟ್ಟಬೇಕಾಗಿದ್ದ ಕಿರು ಅಣೆಕಟ್ಟೆಯ ನಿರ್ಮಾಣ ಕಾಮಗಾರಿಯನ್ನು ಯಾವಾಗ ಮುಗಿಸಲಾಗುವುದು; ಇಲ್ಲಿಯವರೆಗೆ ಈ ಕಿರು ಅಣೆಕಟ್ಟೆಯ ಕಾಮಗಾರಿ ಮುಕ್ತಾಯವಾಗದಿರಲು ಕಾರಣವೇನು; (ವಿವರ ನೀಡುವುದು). | ಈ ಯೋಜನೆಯಲ್ಲಿ ಕಿರು ಅಣೆಕಟ್ಟೆಯ ನಿರ್ಮಾಣ ಕಾಮಗಾರಿಯನ್ನು ಟೆಂಡರ್ ಅನುಸಾರ ವಹಿಸಲಾಗಿದ್ದು ದಿನಾಂಕ 02-06-2020ರ ವೇಳೆಗೆ ಪೂರ್ಣಗೊಳಿಸಲಾಗುವುದು.<br><br>ಇಲ್ಲಿಯವರೆಗೆ ಈ ಕಿರು ಅಣೆಕಟ್ಟೆಯ ಕಾಮಗಾರಿ ಮುಕ್ತಾಯವಾಗದಿರಲು ಕಾರಣಗಳು ಈ ಕೆಳಕಂಡಂತಿದೆ;<br>1. ಕಿರು ಅಣೆಕಟ್ಟೆಯ ಎತ್ತರವನ್ನು ನಿರ್ಧರಿಸುವಲ್ಲಿ ವಿಳಂಬವಾಗಿರುತ್ತದೆ.<br>2. ಕಿರು ಅಣೆಕಟ್ಟೆ ನಿರ್ಮಾಣಕ್ಕೆ ಅಗತ್ಯವಿರುವ ಅರಣ್ಯ ಜಾಗದಲ್ಲಿ ಅರಣ್ಯ ಇಲಾಖೆಯಿಂದ ಕಾಮಗಾರಿಯನ್ನು ಕೈಗೊಳ್ಳಲು ಅನುಮತಿ ನೀಡುವಲ್ಲಿ ವಿಳಂಬ.<br>3. ಪ್ರಕೃತಿ ವಿಕೋಪ ಮತ್ತು ಅತಿವೃಷ್ಠಿಗಳಿಂದ 2018 ಮತ್ತು 2019ನೇ ಸಾಲಿನಲ್ಲಿ ಕೊಡಗು ಜಿಲ್ಲೆಯಾದ್ಯಂತ ಉಂಟಾದ ಅಧಿಕ ಮಳೆಯಿಂದಾಗಿ ಕುಂಡಾಮೇಸ್ತ್ರಿ ಬಳಿ ಕಿರು ಅಣೆಕಟ್ಟು ನಿರ್ಮಾಣದ ಸ್ಥಳದಲ್ಲಿ ಅಧಿಕ ಹೂಳು ಮತ್ತು ಕಲ್ಲುಗಳ ಶೇಖರಣೆ ಉಂಟಾದ ಕಾರಣ ಸದರಿ ಹೂಳನ್ನು ತೆರವುಗೊಳಿಸಿ ನಿರ್ಮಾಣ ಕಾಮಗಾರಿಯನ್ನು ನಿಗದಿತ ಸಮಯದಲ್ಲಿ ಕೈಗೆತ್ತಿಕೊಳ್ಳಲು ವಿಳಂಬವಾಗಿರುತ್ತದೆ.<br>4. ಟೆಂಡರ್ ಪ್ರಕ್ರಿಯೆಯಲ್ಲಿ ಎರಡನೇ ಕರೆ ಆಗಿರುವುದು. |
| ಇ) | ಈ ಕುಂಡಾಮೇಸ್ತ್ರಿ ಯೋಜನೆ ಕಾಮಗಾರಿ ಇದುವರೆವಿಗೂ ಮುಕ್ತಾಯಗೊಳ್ಳದಿರಲು ಕಾರಣವೇನು; | ಕುಂಡಾಮೇಸ್ತ್ರಿ ಮೂಲದ ಮಡಿಕೇರಿ ನೀರು ಸರಬರಾಜು ಯೋಜನೆಯಲ್ಲಿ ಕಿರು ಅಣೆಕಟ್ಟೆ ನಿರ್ಮಾಣ ಹೊರತುಪಡಿಸಿ ಉಳಿದ ಕಾಮಗಾರಿಗಳನ್ನು ಪೂರ್ಣಗೊಳಿಸಿ ಯೋಜನೆಯನ್ನು ದಿನಾಂಕ: 25.09.2016 ರಂದು ಚಾಲನೆಗೊಳಿಸಲಾಗಿದೆ. ಕುಂಡಾಮೇಸ್ತ್ರಿ ಮೂಲಸ್ಥಾವರದಲ್ಲಿ ಕಿರು ಅಣೆಕಟ್ಟು ನಿರ್ಮಾಣ ಕಾರ್ಯವು ಮೇಲೆ ವಿವರಿಸಿರುವಂತೆ ವಿಳಂಬವಾಗಿದ್ದು, ಈಗ ಪ್ರಗತಿಯಲ್ಲಿರುತ್ತದೆ. |

| | | |
|---|---|---|
| ಈ) | ಸದರಿ ಯೋಜನೆಯ ಪೂರ್ಣ ಕಾಮಗಾರಿಯನ್ನು ಯಾವಾಗ ಪೂರ್ಣಗೊಳಿಸಿ ನಗರಸಭೆಗೆ ಒಪ್ಪಿಸಲಾಗುವುದು? | ಸದರಿ ಯೋಜನೆಯ ಕಾಮಗಾರಿಯನ್ನು ಡಿಸೆಂಬರ್ 2020 ರೊಳಗೆ ಪೂರ್ಣಗೊಳಿಸಿ ನಗರಸಭೆಗೆ ಹಸ್ತಾಂತರಿಸಲು ಅಗತ್ಯ ಕ್ರಮ ಕೈಗೊಳ್ಳಲಾಗುವುದು. |

**ನಅಇ 30 ಯುಎಂಎಸ್ 2020**

**(ಬಿ.ಎ.ಬಸವರಾಜ)**
**ನಗರಾಭಿವೃದ್ಧಿ ಸಚಿವರು**